ಜಿಹ್ವಾ ತವಾರ್ಪಿತಾನ್ನೇಷು ದೃಷ್ಟಿಃ ಸಾಧುಜನೇಕ್ಷಣೇ ।
ತ್ವತ್ಸ್ಥಾನಗಮನೇ ಪಾದೌ ಗಾತ್ರಂ ತ್ವದ್ಭಕ್ತಸಂಗಮೇ ॥೪೦॥

ಏವಂ ಸಂಪ್ರಾರ್ಥಿತಸ್ತಾಭ್ಯಾಮುವೋಚಂ ಚ ಕುಬೇರಜೌ ।
ಯದುಕ್ತಂ ತತ್ತಥೈವಾಸ್ತು ಸ್ವಲೋಕಂ ಯಾತ ಮಾ ಚಿರಂ ॥೪೨॥

ಯುವಯೋಃ ಸಂಗಮಂ ಯೇಽನ್ಯೇ ಕರಿಷ್ಯಂತಿ ಧರಾತಲೇ ।
ತೇಷಾಂ ಚಾಹೈತುಕೀ ಭಕ್ತಿರ್ಭವಿಷ್ಯತಿ ನ ಸಂಶಯಃ ॥೪೩॥

ಸಾಧುಸಂಗಾದ್ಧಿ ವಿಮಲಾ ಭಕ್ತಿರ್ಭವತಿ ನೈಷ್ಠಿಕೀ ।
ಭಕ್ತಿರೇವ ಪರೋ ಲಾಭಸ್ತತೋಽನ್ಯನ್ನಾಸ್ತಿ ಕಿಂಚನ ॥೪೪॥

ಭಕ್ತ್ಯೈವಾಹಂ ಭವೇ ವಶ್ಯೋ ಯುವಯೋಃ ಸಂಭವತ್ವಲಂ ।
ಇತ್ಯುಕ್ತ್ವಾ ತು ಪ್ರಣಮ್ಯಾಶು ತಥಾ ಕೃತ್ವಾ ಪ್ರದಕ್ಷಿಣಂ ॥೪೫॥

---

ನಮ್ಮ ಜಿಹ್ವೆಗಳು ನೀನು ಅನುಗ್ರಹಿಸಿದ ಅನ್ನದಲ್ಲಿ ಆಸಕ್ತವಾಗಲಿ. ದೃಷ್ಟಿಯು ಸಾಧುಸಂತರನ್ನು ನೋಡಲಿ. ಪಾದಗಳು ನಿನ್ನ ಹತ್ತಿರ ಬರುವವಾಗಲಿ. ಶರೀರವು ನಿನ್ನ ಭಕ್ತರ ಸಂಪರ್ಕವುಳ್ಳದ್ದಾಗಲಿ. ॥೪೧॥

ಈ ರೀತಿಯಾಗಿ ಕುಬೇರನ ಪುತ್ರರು ಪ್ರಾರ್ಥಿಸಲು ನಾನು ಹಾಗೆಯೇ ಆಗಲೆಂದು ವರವನ್ನು ಕೊಟ್ಟು, ನಿಮ್ಮ ಲೋಕಕ್ಕೆ ಶೀಘ್ರವಾಗಿ ಹೋಗಿರಿ. ತಡಮಾಡಬೇಡಿರಿ. ಎಂದೆನು. ॥೪೨॥

ಈ ಲೋಕದಲ್ಲಿ ಯಾರು ನಿಮ್ಮ ಸಹವಾಸವನ್ನು ಮಾಡುವರೋ ಅವರಿಗೆ ನನ್ನಲ್ಲಿ ನಿಶ್ಚಲವಾದ ಭಕ್ತಿಯುಂಟಾಗುವುದು. ಈ ವಿಷಯದಲ್ಲಿ ಸಂದೇಹವಿಲ್ಲ. ಸಾಧುಗಳ ಸಹವಾಸದಿಂದ ಬುದ್ಧಿಯು ಪರಿಶುದ್ಧವಾಗಿ ನಿಶ್ಚಲವಾಗುವುದು. ॥೪೩॥

ಭಕ್ತಿಯೇ ಉತ್ಕೃಷ್ಟವಾದ ಲಾಭವೇ ಹೊರತು ಇನ್ನು ಯಾವುದೂ ಅಲ್ಲ. ಈ ಸಂಸಾರದಲ್ಲಿ ನಾನು ಭಕ್ತಿಯಿಂದಲೇ ವಶನಾಗುವೆನು. ಈ ಭಕ್ತಿಯು ನಿಮಗೆ ಹೆಚ್ಚಾಗಿ ಉಂಟಾಗಲಿ. ಎಂದು ಹೇಳಲು, ಆ ಕುಬೇರಪುತ್ರರು ನನಗೆ ಪ್ರದಕ್ಷಿಣ ನಮಸ್ಕಾರಮಾಡಿ ನನ್ನ ಅಪ್ಪಣೆಯ ಮೇರೆಗೆ ಕುಬೇರನ ಗೃಹಕ್ಕೆ ತೆರಳಿದರು. ॥೪೪-೪೫॥

ಮಮಾಜ್ಞಯಾ ಸಂಪ್ರಯಾತೌ ಕುಬೇರಭವನಂ ಪುನಃ ।
ಗೋಪಾಸ್ತು ನಿನದಂ ಶ್ರುತ್ವಾ ದ್ರುಮಯೋಃ ಪತಮಾನಯೋಃ॥೪೬॥

ತತ್ರಸುಃ ಶೀಘ್ರಮಾಜಗ್ಮುಃ ಪಶ್ಯಂತೋ ಮಾಂ ಸುವಿಸ್ಮಿತಾಃ ।
ಕಥಮೇತೌ ನಿಪತಿತೌ ತರೂ ಚಿರತರ ಸ್ಥಿತೌ ॥೪೭॥

ತತ್ರ ನಂದಃ ಸಮಾಗತ್ಯ ಮುಕ್ತ್ವಾ ಬಾಲಮುಲೂಖಲಾತ್ ।
ಆನೀಯಾಂಕಮಥೋ ಚುಂಬನ್ವದನಂ ಮುದಿತಃ ಪರಂ ॥೪೮॥

ಅಕ್ಷತಂ ಚ ಸಮಾಲೋಕ್ಯ ನಿಜಭಾಗ್ಯಮತರ್ಕಯತ್ ।
ಗೋಪಾಃ ಪರಸ್ಪರಂ ಪ್ರೋಚುರದ್ಭುತಂ ಕಿಮಭೂದಿಹ ॥೪೯॥

ದ್ರುಮಯೋಃ ಪತನಂ ಕಸ್ಮಾತ್ಸಹಸಾ ಸಮುಪದ್ಯತ ।
ಬಾಲಕೋಽಸೌ ಮೃತ್ಯುಮುಖೇ ಪತಿತೋ ವಿಧಿನಾಽವಿತಃ ॥೫೦॥

ಇತಿ ಮಿಮಾಂಸಮಾನೇಷು ಗೋಪೇಷು ಪತಿತೌ ದ್ರುಮೌ ।
ತಾನೂಚುರ್ಬಾಲಕಾಸ್ತತ್ರ ನಂದಾದೀನ್ ಶುದ್ಧಬುದ್ಧಯಃ ॥೫೧॥

---

ಗೋಪರೆಲ್ಲರೂ ಮರಬೀಳುವ ಶಬ್ದವನ್ನು ಕೇಳಿ ಭಯದಿಂದ ಅಲ್ಲಿಗೆ ಓಡಿ ಬಂದು ನನ್ನನ್ನು ನೋಡಿ ಆಶ್ಚರ್ಯಗೊಂಡರು. ಅನೇಕ ವರ್ಷಗಳಿಂದಲೂ ಇರುವ ಈ ವೃಕ್ಷಗಳು ಈಗ ಹೇಗೆ ಬಿದ್ದವು ? ಎಂದು ಹೇಳಿದರು. ||೪೬-೪೭||

ನಂದನು ಅಲ್ಲಿಗೆ ಬಂದು ಒರಳಿನಿಂದ ನನ್ನನ್ನು ಬಿಡಿಸಿ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ನನ್ನ ಮುಖವನ್ನು ಚುಂಬಿಸಿದನು. ಯಾವ ಗಾಯವೂ ಆಗದ ನನ್ನನ್ನು ನೋಡಿ ತನ್ನ ಭಾಗ್ಯವನ್ನು ಅಭಿನಂದಿಸಿದನು. ||೪೮||

ಗೋಪರು ಪರಸ್ಪರವಾಗಿ ಏನು ಅದ್ಭುತವು ನಡೆಯಿತು ? ಈ ಮರಗಳು ಆಕಸ್ಮಾತ್ತಾಗಿ ಬೀಳಲು ಕಾರಣವೇನು ? ಈ ಹುಡುಗನು ಮೃತ್ಯುವಿಗೆ ತುತ್ತಾಗಿ ಬದುಕಿದುದು ಇವನ ಭಾಗ್ಯವೇ ಸರಿ ! ಎಂದು ಮಾತನಾಡಿಕೊಂಡರು. ||೪೯-೫೦||

ಈರೀತಿಯಾಗಿ ಗೋಪರು ವಿಚಾರಮಾಡುತ್ತಿರಲು ಅಲ್ಲಿರುವ ಋಜು ಬುದ್ಧಿಗಳಾದ ಬಾಲಕರು ನಂದಗೋಪಾದಿಗಳನ್ನು ಕುರಿತು ಹೀಗೆ ಹೇಳಿದರು. ಒರಳು ಕಲ್ಲನ್ನು ಎಳೆಯುತ್ತಿರಲು ಈ ಮರಗಳು ಬಿದ್ದವು. ಈ ಮರಗಳಿಂದ ಕೃಷ್ಣನಂತಿರು

**ಉಲೂಖಲಂ ಕರ್ಷಯತಾ ಕೃಷ್ಣೇನೇಮೌ ನಿಪಾತಿತೌ ।**
**ತಾಭ್ಯಾಂ ವಿನಿರ್ಗತೌ ದೇವೌ ಕೃಷ್ಣಾನುಸದೃಶೌ ಶುಭೌ ॥೫೨॥**

**ಸ್ತುತ್ವಾ ನತ್ವಾ ಉಪಾಮಂತ್ರ್ಯ ಗತಾವಾತ್ಮನಿಕೇತನಂ ।**
**ಬಾಲಾನಾಂ ವಚನಂ ಕೇಚಿಜ್ಜಗೃಹುರ್ನೇತಿ ಕೇಚನ ॥೫೩॥**

**ಸ್ಮೃತ್ವಾ ಪೂರ್ವಕೃತಂ ಕರ್ಮ ಕೇಚಿತ್ಸತ್ಯಂ ಚ ಮೇನಿರೇ ।**
**ಸಂದಿಗ್ಧಚೇತಸಃ ಕೇಚಿತ್ ಬಭೂವುಸ್ತೇ ವ್ರಜೌಕಸಃ ॥೫೪॥**

**ನಂದಾದ್ಯಾ ವ್ರಜಗೋಪಾಶ್ಚ ಯಶೋದಾದ್ಯಾಶ್ಚ ಗೋಪಿಕಾಃ ।**
**ಪಶ್ಯಂತೋ ಮಾಂ ಕುಶಲಿನಂ ಮೋದಮಾಪುರಸೀಮಕಂ ॥೫೫॥**

**ನಂದೋ ಮಹಾಮನಾಸ್ತತ್ರ ದ್ವಿಜಾನಾಹೂಯ ಶ್ರದ್ಧಯಾ ।**
**ದದೌ ದಾನಾನಿ ಸುಭೃಶಂ ಬ್ರಾಹ್ಮಣೇಭ್ಯಃ ಸಮಂತತಃ ॥೫೬॥**

---

ವವರೂ, ಮಂಗಳಕರರೂ ಆದ ಇಬ್ಬರು ದೇವತೆಗಳು ಹೊರಟು ಬಂದು ಶ್ರೀಕೃಷ್ಣನನ್ನು ಸ್ತೋತ್ರಮಾಡಿ ನಮಸ್ಕರಿಸಿದರು. ಕೃಷ್ಣನನ್ನು ಆಮಂತ್ರಿಸಿ ತಮ್ಮ ಸ್ಥಾನಕ್ಕೆ ಹೋದರು. ॥೫೧-೫೨॥

ಗೋಪರು ಈ ಬಾಲಕರ ಮಾತನ್ನು ಕೇಳಿ ಕೆಲವರು ಇರಬಹುದೆಂದು ನಂಬಿದರು. ಇನ್ನು ಕೆಲವರು ಆ ಮಾತನ್ನು ನಂಬಲಿಲ್ಲ. ಇನ್ನು ಕೆಲವರು ಈ ಹಿಂದೆ ನಡೆಯಿಸಿದ ಅದ್ಭುತಕಾರ್ಯಗಳನ್ನು ಯೋಚಿಸಿ ಇದುಸತ್ಯವಾದುದೆಂದು ತಿಳಿದರು. ಇನ್ನು ಕೆಲವರು ಸಂಶಯಪಟ್ಟರು. ॥೫೩-೫೪॥

ನಂದನೇ ಮುಂತಾದ ಗೋಕುಲವಾಸಿಗಳೂ, ಯಶೋದೆಯೇ ಮುಂತಾದ ಗೋಪಿಕಾಸ್ತ್ರೀಯರೂ ಸಹ ಕ್ಷೇಮದಿಂದಿರುವ ನನ್ನನ್ನು ನೋಡಿ ಮಿತಿಮೀರಿದ ಸಂತೋಷವನ್ನು ಹೊಂದಿದರು. ॥೫೫॥

ಉದಾರ ಬುದ್ಧಿಯಾದ ನಂದನು ಬ್ರಾಹ್ಮಣರನ್ನು ಕರೆಯಿಸಿ ನನ್ನ ಕ್ಷೇಮ ಲಾಭಕ್ಕಾಗಿ ಶ್ರದ್ಧೆಯಿಂದ ಅನೇಕ ದಾನಗಳನ್ನು ಮಾಡಿದನು. ॥೫೬॥

ಯಶೋದಾ ಪೂರ್ವವತ್ತ್ರಸ್ತಾ ರಕ್ಷಾವಿಧಿಮಕಾರಯತ್ ॥೫೭॥

ಇದಂ ಮಯಾ ತೇ ಕಥಿತಂ ಮಹಾದ್ಭುತಂ
ಬಾಲ್ಯೇವಯಸ್ಯೈಶ್ಚರಿತಂ ಮಯಾ ಯತ್ ।
ಶೃಣೋತಿ ಯಃ ಶ್ರಾವಯತೇ ಚ ಭಕ್ತಿಮಾನ್
ಅನುಗ್ರಹೋ ಮೇ ಭವತೀಹ ತಸ್ಮಿನ್ ॥೫೮॥

ಇತಿ ಶ್ರೀ ಸಕಲಪುರಾಣಸಾರಭೂತೇ ಆದಿಪುರಾಣೇ ವೈಯ್ಯಾಸಿಕೇ
ನಾರದ ಶೌನಕ ಸಂವಾದೇ ಯಮಲಾರ್ಜುನಮೋಕ್ಷವರ್ಣನಂ
ನಾಮ ಏಕೋನತ್ರಿಂಶೋಽಧ್ಯಾಯಃ

## ಸಮಾಪ್ತಂ ಚೇದಂ ಆದಿಪುರಾಣಂ

---

ಯಶೋದೆಯು ಹಿಂದಿನಂತೆ ಹೆದರಿ ನನ್ನ ರಕ್ಷೆಗಾಗಿ ತಾಯತಿ ಬೂದಿ ಯಂತ್ರಬಂಧನ ಮುಂತಾದ ವಿಧಿಗಳನ್ನು ಮಾಡಿಸಿದಳು. ॥೫೭॥

ನಾನು ಬಾಲ್ಯದಲ್ಲಿ ನನ್ನ ಸ್ನೇಹಿತರೊಡನೆ ನಡೆಯಿಸಿದ ಅದ್ಭುತವಾದ ಈ ಚರಿತ್ರೆಯನ್ನು ಹೇಳಿರುವೆನು. ಈ ಚರಿತ್ರೆಯನ್ನು ಯಾವನು ಕೇಳುವನೋ ಮತ್ತೂ ಇನ್ನೊಬ್ಬರಿಗೆ ಇದನ್ನು ಹೇಳುವನೋ ಅವನಿಗೆ ನಾನು ಭಕ್ತಿಯನ್ನು ಕೊಟ್ಟು ಅನುಗ್ರಹಿಸುವೆನು. ॥೫೮॥

ಅಷ್ಟಾವಕ್ರಗೀತೆ, ದೇವೀಮಾಹಾತ್ಮ್ಯ, ಪಂಚೋಪನಿಷತ್ತುಗಳು, ದೇವೀ ಭಾಗವತ ಮಹಾಪುರಾಣ, ಲಿಂಗಮಹಾಪುರಾಣ, ಸೂತಸಂಹಿತಾ, ತ್ರಿಪುರಾರಹಸ್ಯ, ಕಲ್ಕಿಪುರಾಣ, ಆದಿಪುರಾಣ, ಶ್ರೀವಿದ್ಯಾಮಂತ್ರಭಾಷ್ಯ, ಇತ್ಯಾದಿ ಗ್ರಂಥಗಳ ಅರ್ಥಾನುವಾದವನ್ನು ಕನ್ನಡದಲ್ಲಿ ಬರೆದಿರುವ ಚಂದ್ರಶೇಖರಶಾಸ್ತ್ರಿಯ ಗ್ರಂಥಗಳಲ್ಲಿ ಆದಿಪುರಾಣದ ಅರ್ಥಾನುವಾದವೆಂಬ ಈ ಗ್ರಂಥವು ಸಮಾಪ್ತವಾಯಿತು.

ಶಿವೇ ತವ ಕೃಪಾ ದದೌ ಗೃಹಕಳತ್ರವಿತ್ತಾದಿಕಂ
ಸುತಾನ್ ದುಹಿತೃತತ್ಸುತಾನ್ ಸುಕೃತಯಶ್ಚ ಕಾಶ್ಚಿತ್ ಕೃತಾಃ ।
ಅಲಂಮತಿ ರಿಹಾಸ್ತು ಮೇ ಮಮ ಕದಾಽಂತ ಮಾಶಾ ವ್ರಜೇತ್
ಪ್ರಬೋಧಸುಖಮರ್ಥಯೇ ಪರವಿರಕ್ತಿಮುಕ್ತೀ ಮುದಾ ॥

ಮಂಗಳಕರಳಾದ ಓ ತಾಯಿಯೇ, ನಿನ್ನ ದಯೆಯು ನನಗೆ ಮನೆ, ಹೆಂಡಿತಿ, ಐಶ್ವರ್ಯ, ಅಧಿಕಾರ, ಮಕ್ಕಳು, ಮೊಮ್ಮಕ್ಕಳು, ಈ ಮುಂತಾದ ಐಹಿಕವಾದ ಸುಖ ಸಾಧನಗಳನ್ನು ನನ್ನ ಯೋಗ್ಯತೆಗೆ ತಕ್ಕಮಟ್ಟಿಗೆ ಅನುಗ್ರಹಿಸಿದೆ. ಯಶಸ್ಕರವಾದ ಧಾರ್ಮಿಕಗ್ರಂಥ ರಚನೆಗಳಿಂದ ಪ್ರಭುಸೇವೆ, ಜನಸೇವೆ, ಭಾಷಾಸೇವೆ, ಈಶಸೇವೆಗಳನ್ನೂ ನನ್ನ ಬುದ್ಧಿ, ಶಕ್ತಿ, ಸನ್ನಿವೇಶಗಳಿಗೆ ತಕ್ಕಂತೆ ಆದಷ್ಟು ಮಟ್ಟಿಗೆ ನೆರವೇರಿಸಿರುವುದೂ ಆಗಿದೆ. ಈ ಸುಖಸಾಧನಗಳು ಎಷ್ಟು ಹೆಚ್ಚಿನವಾದರೂ ಅವಿಶುದ್ಧಿ, ಕ್ಷಯ, ಅತಿಶಯಗಳೆಂಬ, ಸಾರ್ವತ್ರಿಕವೂ ಅನಿವಾರ್ಯವೂ ಆಗಿರುವ, ದೋಷಗಳಿಂದ ಕೂಡಿಯೇ ಇರುತ್ತವೆಂಬುದನ್ನು ಮನಗಂಡುದೂ ಆಗಿದೆ. ಆದುದರಿಂದ ಇವುಗಳಲ್ಲಿ ಆಶೆಯು ಇನ್ನೂ ಹೆಚ್ಚಾಗಿ ಮುಂದುವರಿಯದೆ, ಅಲಂಬುದ್ಧಿಯು ಎಂದರೆ, ಇಷ್ಟು ಸಾಕು, ಇನ್ನೂ ಬೇಡ, ಎಂಬ ತೃಪ್ತಿ ಮನೋಭಾವವು ನನ್ನ ಹೃದಯದಲ್ಲಿ ಬಲಗೊಳ್ಳುವಂತಾಗಲಿ. ಏಕೆಂದರೆ ಈ ಆಶೆಗಳಿಗೆ ಪರ್ಯವಸಾನವೇ ಆಗದೆ ಶಾಂತಿಸುಖಗಳೂ ಎಂದಿಗೂ ದೊರೆಯದೇ ಹೋಗಿ, ನಿಶ್ರೇಯಸಪ್ರಾಪ್ತಿಗೆ ಅಡ್ಡಿಯೇ ಆಗುತ್ತಿರುವುವು. ಆದುದರಿಂದ ನಾನು ಯಾವಾಗಲೂ ಪರತತ್ವಜ್ಞಾನದ ಸುಖವನ್ನೂ, ಮೇಲಾದ ವೈರಾಗ್ಯವನ್ನೂ ಮೋಕ್ಷದ ನಿತ್ಯಾನಂದದ ಅಪರೋಕ್ಷಾನುಭವವನ್ನೂ, ಸಂತೋಷದಿಂದ ಪಡೆಯಲು ಇಚ್ಛಿಸುತ್ತಿರುತ್ತೇನೆ.

## ಆದಿಪುರಾಣವು ಮುಗಿದದು.

|| ಹರಿಃ ಓಂ ಶ್ರೀಕೃಷ್ಣಾರ್ಪಣಮಸ್ತು ||



ಕರ್ಣಾಟಾಧಿಪತಿ ಶ್ರೀಮಜ್ಜಯಚಾಮೇಂದ್ರ ಶಾಸನಾತ್ ।
ಆದಿಪುರಾಣಸ್ಯಾರ್ಥಾನುವಾದಂ ಕನ್ನಡಭಾಷಯಾ ॥
ಸುಬ್ಬಮ್ಮಾಂಬಾ ದೇವಯಜ್ವ ತನಯಃ ಚಂದ್ರಶೇಖರಃ ।
ಜನಾನಾಮುಪಕಾರಾಯ ರಚಯಾಮಾಸ ಸಾದರಂ ॥
ವಾಣೀಸೇವಾಂ ರಾಜಸೇವಾಂ ಜನಸೇವಾಂ ಮುದಾ ಕೃತಾಂ ।
ಸ್ವೀಕೃತ್ಯ ಪಾತು ಶ್ರೀಕೃಷ್ಣಃ ದೇವೋ ರಾಜಾ ಚ ಭಾರತೀ ॥

|| ಓಂ ತತ್ಸತ್ ||